# ಕರ್ನಾಟಕ ವಿಧಾನ ಪರಿಷತ್

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 919 (755) |
| ಮಾನ್ಯ ಪರಿಷತ್ತಿನ ಸದಸ್ಯರ ಹೆಸರು | : | ಶ್ರೀ ಡಾ|| ಚಂದ್ರಶೇಖರ್ ಬಿ. ಪಾಟೀಲ್ (ಪದವೀಧರರ ಕ್ಷೇತ್ರ) |
| ಉತ್ತರಿಸುವ ದಿನಾಂಕ | : | 10/03/2021 |
| ಉತ್ತರಿಸುವ ಸಚಿವರು | : | ಮಾನ್ಯ ಉಪ ಮುಖ್ಯ ಮಂತ್ರಿಗಳು, ಲೋಕೋಪಯೋಗಿ ಇಲಾಖೆ. |

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ 2018-19 ನೇ ಸಾಲಿನಿಂದ ಪ್ರಸ್ತುತ ದಿನಾಂಕದವರೆಗೆ PWD – Decode – 2014 ಪ್ರಕಾರ ಎಷ್ಟು ಗುತ್ತಿಗೆದಾರರ ನೊಂದಣಿ (Registration) ಆಗಿದೆ. (ವಲಯವಾರು ಹಾಗೂ ಜಿಲ್ಲಾವಾರು ನೊಂದಣಿಯಾದ ಗುತ್ತಿಗೆದಾರರ ಹೆಸರುಗಳೊಂದಿಗೆ ವಿವರ ನೀಡುವುದು) | ಲೋಕೋಪಯೋಗಿ ಇಲಾಖೆಯ PWD-D-CODe-2014 ರ ಪ್ರಕಾರ 2018-19 ನೇ ಸಾಲಿನಿಂದ ಪ್ರಸ್ತುತ ದಿನಾಂಕದವರೆಗೆ ನೋಂದಣಿಯಾಗಿರುವ ಗುತ್ತಿಗೆದಾರರ ವಲಯವಾರು ಮಾಹಿತಿ ಈ ಕೆಳಕಂಡಂತೆ ಇರುತ್ತದೆ. |

| ವಲಯ | ದರ್ಜೆ 1 ಸಂಖ್ಯೆ | ದರ್ಜೆ 2 ಸಂಖ್ಯೆ | ದರ್ಜೆ 3 ಸಂಖ್ಯೆ | ದರ್ಜೆ 4 ಸಂಖ್ಯೆ |
|---|---|---|---|---|
| ದಕ್ಷಿಣ | 4388 | 2438 | 6063 | 2489 |
| ಉತ್ತರ | 3601 | 2181 | 1782 | 3540 |
| ಈಶಾನ್ಯ | 103 | 353 | 3014 | 2583 |

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಆ) | ರಾಜ್ಯದಲ್ಲಿನ ರಸ್ತೆಗಳಲ್ಲಿ ರಸ್ತೆ ಉಬ್ಬುಗಳು ವೈಜ್ಞಾನಿಕವಾಗಿಲ್ಲದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ರಸ್ತೆ ಹುಬ್ಬುಗಳನ್ನು ವೈಜ್ಞಾನಿಕವಾಗಿ ನಿರ್ಮಿಸಲು ಸರ್ಕಾರ ಯಾವ ಕ್ರಮ ಕೈಗೊಂಡಿದೆ. | ಹೌದು<br>ಸರ್ಕಾರದ ಸುತ್ತೋಲೆ ಸಂಖ್ಯೆ: ಲೋಇ 277 ಸಿಆರ್ ಎಂ 2017 ದಿನಾಂಕ:18.04.2017 ರಲ್ಲಿ ರಾಜ್ಯದ ಅವೈಜ್ಞಾನಿಕ ರಸ್ತೆ ಉಬ್ಬುಗಳನ್ನು ಕೂಡಲೇ ತೆರವುಗೊಳಿಸುವುದು ಹಾಗೂ ಕೆಲವು ಸ್ಥಳಗಳಲ್ಲಿ ರಸ್ತೆಯ ಉಬ್ಬುಗಳು ಅವಶ್ಯವೆನಿಸಿದಲ್ಲಿ ಅವೈಜ್ಞಾನಿಕವಾಗಿರುವ ರಸ್ತೆಯ ಉಬ್ಬುಗಳನ್ನು ಐ.ಆರ್.ಸಿ. ಮಾನದಂಡಗಳಿಗೆ ಅನುಗುಣವಾಗಿ ವೈಜ್ಞಾನಿಕವಾಗಿ ಪರಿವರ್ತಿಸಿ, ಅವುಗಳ ನಿರ್ವಹಣೆ ಮಾಡುವುದು. ಈಗಾಗಲೇ ಅಸ್ತಿತ್ವದಲ್ಲಿರುವ ವೈಜ್ಞಾನಿಕ ರಸ್ತೆಯ ಉಬ್ಬುಗಳಿಗೆ ವಾಹನ ಸವಾರರಿಗೆ ದೂರದಿಂದಲೇ ಗೋಚರಿಸುವಂತೆ ಬಣ್ಣ ಬಳಿಯುವುದಲ್ಲದೇ ಕೆಲವು ಮುಖ್ಯ ಸ್ಥಳಗಳಲ್ಲಿ ಬೆಳಕನ್ನು ಪ್ರತಿಫಲಿಸುವ ರೇಡಿಯಂ ಬಣ್ಣದ ಪಟ್ಟಿಗಳನ್ನು ಅಂಟಿಸಿ ಹಾಗೂ Cat Eyes ಅನ್ನು ಅಳವಡಿಸಿ ಅಪಘಾತ ರಹಿತ ಸಂಚಾರಕ್ಕೆ ಅನುವು ಮಾಡಿಕೊಡಲು ಕಟ್ಟುನಿಟ್ಟಿನ ಕ್ರಮ ಕೈಗೊಳ್ಳಲು ಸೂಚಿಸಿದ್ದು, ಅದರಂತೆ ರಸ್ತೆ ಉಬ್ಬುಗಳನ್ನು ವೈಜ್ಞಾನಿಕವಾಗಿ ನಿರ್ಮಿಸಲು ಕ್ರಮ ಕೈಗೊಳ್ಳಲಾಗುತ್ತಿದೆ. |
| ಇ) | ರಾಜ್ಯದಲ್ಲಿ ಅವೈಜ್ಞಾನಿಕ ರಸ್ತೆ ಹಂಪ್ಸ್ ಗಳು ಎಲ್ಲೆಲ್ಲಿ ಇವೆ; (ಜಿಲ್ಲಾವಾರು ಮತ್ತು ತಾಲ್ಲೂಕುವಾರು ಮಾಹಿತಿ ನೀಡುವುದು) | ಲೋಕೋಪಯೋಗಿ ಇಲಾಖೆಯ ವ್ಯಾಪ್ತಿಯಲ್ಲಿನ ರಾಜ್ಯ ಹೆದ್ದಾರಿ ಹಾಗೂ ಜಿಲ್ಲಾ ಮುಖ್ಯ ರಸ್ತೆಗಳಲ್ಲಿ ಅವೈಜ್ಞಾನಿಕ ರಸ್ತೆ ಹಂಪ್ಸ್‌ಗಳನ್ನು ತೆಗೆದು ಹಾಕಿ ಅವಶ್ಯಕತೆ ಇದ್ದಲ್ಲಿ ವೈಜ್ಞಾನಿಕ ಹಂಪ್ಸ್‌ಗಳನ್ನು ನಿರ್ಮಿಸಲು ಕ್ರಮ ಕೈಗೊಳ್ಳಲಾಗಿದೆ. |

| | | |
|---|---|---|
| ಈ) | ರಾಜ್ಯದ ವಿವಿಧ ಜಿಲ್ಲೆಗಳಲ್ಲಿ ಅಕ್ರಮವಾಗಿ ಗುತ್ತಿಗೆದಾರರ ನೊಂದಣಿಯಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದರೆ ತನಿಖೆಯನ್ನು ಕೈಗೊಳ್ಳಲಾಗಿದೆಯೇ; ತನಿಖೆ ಯಾವ ಹಂತದಲ್ಲಿದೆ ಮತ್ತು ತಪ್ಪಿಸ್ಥರ ವಿರುದ್ಧ ಈವರೆಗೆ ಯಾವ ಕ್ರಮ ಕೈಗೊಳ್ಳಲಾಗಿದೆ? (ಸಂಪೂರ್ಣ ವಿವರ ನೀಡುವುದು) | ಲೋಕೋಪಯೋಗಿ ಇಲಾಖೆಯ ನಾಲ್ಕು ವಲಯಗಳ ಪೈಕಿ ಉತ್ತರ ವಲಯ (ಧಾರವಾಡ) ವಲಯದಲ್ಲಿ ಮಾತ್ರ ಗುತ್ತಿಗೆದಾರರು ಸುಳ್ಳು ದಾಖಲೆ ನೀಡಿ ನೊಂದಣಿ/ ನವೀಕರಣ ಹೊಂದಿರುವ ಬಗ್ಗೆ ದೂರುಗಳು ಸ್ವೀಕೃತಿಯಾಗುತ್ತಿದ್ದು, ಈ ಸಂಬಂಧ ಅಧೀಕ್ಷಕ ಅಭಿಯಂತರರು(ವಿನ್ಯಾಸ) ಇವರ ನೇತೃತ್ವದಲ್ಲಿ ತನಿಖೆ ನಡೆಸಲಾಗುತ್ತಿದ್ದು, ಈ ಸಂಬಂಧ ಸಂಪೂರ್ಣ ವರದಿ ಸ್ವೀಕೃತಿಯಾದ ನಂತರ ನಿಯಮಾನುಸಾರ ಪರಿಶೀಲಿಸಿ ಕ್ರಮವಹಿಸಲಾಗುವುದು. |

ಲೋಇ 15 ಬಿಎಲ್ ಕ್ಯೂ 2021

(ಗೋವಿಂದ.ಎಂ.ಕಾರಜೋಳ)
ಉಪಮುಖ್ಯಮಂತ್ರಿ,
ಲೋಕೋಪಯೋಗಿ ಇಲಾಖೆ